# ಪ್ರವಾದಿ(ಸ) ರವರ ಜನನ ಯಾವಾಗ...?



الحركة النصيحة الإسلامية

ANNASEEHA ISLAMIC MOVEMENT

SURATKAL, MANGALORE - 575 014
MOB: 9731593091 / 9945171612

ಪ್ರವಾದಿ(ಸ) ಹುಟ್ಟಿದ ದಿನ ಮತ್ತು ತಿಂಗಳು ಯಾವುದೆಂಬ ಬಗ್ಗೆ ವಿದ್ವಾಂಸರು ಭಿನ್ನಮತದಲ್ಲಿದ್ದಾರೆ.

## 1. ಪ್ರವಾದಿ(ಸ) ರವರು ಹುಟ್ಟಿದ ದಿನ ಯಾವುದು?

ಪ್ರವಾದಿ(ಸ) ರವರು ಜನಿಸಿದ ದಿನ ಸೋಮವಾರವಾಗಿದೆ. ಇದರ ಕುರಿತು ಪ್ರವಾದಿ(ಸ) ಯವರಿಂದ ಅಧಿಕೃತ ಹದೀಸೊಂದು ಸಹೀಹ್ ಮುಸ್ಲಿಂ ಮತ್ತು ಇತರ ಹದೀಸ್ ಗ್ರಂಥಗಳಲ್ಲಿ ಅಬೂ ಕತಾದಾ ಅಲ್-ಅನ್ಸಾರಿ(ರ) ರವರಿಂದ ವರದಿಯಾಗಿದೆ. ಅದರಲ್ಲಿರುವ ಪ್ರಕಾರ, ಪ್ರವಾದಿ(ಸ) ರೊಂದಿಗೆ ಸೋಮವಾರದ ಉಪವಾಸದ ಬಗ್ಗೆ ಕೇಳಲಾದಾಗ, ಅವರು “ಅಂದು ನಾನು ಹುಟ್ಟಿದ ದಿನ” ಎಂದು ಉತ್ತರಿಸಿದರು.

ಈ ಹದೀಸಿನ ಆಧಾರದಲ್ಲಿ ಪ್ರವಾದಿ(ಸ) ರವರ ಜನ್ಮದಿನವು ಸೋಮವಾರವೆಂದು ಸಾಬೀತಾಗುತ್ತದೆ. ಈ ಸ್ಪಷ್ಟ

ಹೇಳಿಕೆಯನ್ನು ಹೊರತುಪಡಿಸಿ ಪ್ರವಾದಿ(ಸ) ರವರ ಜನ್ಮದಿನದ ಕುರಿತು ಬಂದಿರುವ ಹೇಳಿಕೆಗಳೆಲ್ಲವೂ ಅಸತ್ಯವೂ ನಿರಾಧಾರವೂ ಆಗಿವೆ. ಏಕೆಂದರೆ ಅವು ಪ್ರವಾದಿ(ಸ) ರವರ ಸ್ಪಷ್ಟ ಹದೀಸಿಗೆ ವಿರುದ್ಧವಾದ ಹೇಳಿಕೆಗಳಾಗಿವೆ.

ಇಬ್ನ್ ಅಬ್ದುಲ್ ಬರ್ರ್ ಹೇಳುತ್ತಾರೆ: "ಪ್ರವಾದಿ(ಸ) ರವರು ಸೋಮವಾರ ಜನಿಸಿದರು ಎಂಬುದರಲ್ಲಿ ಯಾವುದೇ ವಿವಾದಗಳಿಲ್ಲ".

ಇಬ್ನುಲ್ ಜೌಝಿ ಹೇಳುತ್ತಾರೆ: "ಪ್ರವಾದಿ(ಸ) ರವರು ಸೋಮವಾರ ಜನಿಸಿದರು ಎಂಬ ವಿಷಯದಲ್ಲಿ ಒಮ್ಮತಾಭಿಪ್ರಾಯವಿದೆ".

ಇಮಾಮ್ ನವವಿ ಹೇಳುತ್ತಾರೆ: "ಪ್ರವಾದಿ(ಸ) ರವರು ಸೋಮವಾರ ಜನಿಸಿದರು ಎನ್ನುವುದರಲ್ಲಿ ಎಲ್ಲರ ಒಮ್ಮತವಿದೆ".

ಇಬ್ನು ಕಸೀರ್ ಹೇಳುತ್ತಾರೆ: “ಇದರ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ”.

ಪ್ರವಾದಿ(ಸ) ರವರು ರಬೀಉಲ್ ಅವ್ವಲ್ ತಿಂಗಳ ಹದಿನೇಳನೇ ದಿನ ಶುಕ್ರವಾರದಂದು ಜನಿಸಿದರು ಎನ್ನುವವರು ಮಹಾ ತಪ್ಪು ಗ್ರಹಿಕೆಯಲ್ಲಿರುವರು. ಇದನ್ನು ಹಾಫಿಝ್ ಇಬ್ನು ದಹಿಯ್ಯರವರು ಕೆಲವು ಶಿಯಾಗಳ إعلام الورى بأعلام الهدى ಎನ್ನುವ ಪುಸ್ತಕದಿಂದ ಆಯ್ದು ಅದನ್ನು ಉಲ್ಲೇಖಿಸಿ ಅದು ದುರ್ಬಲವಾದ ಹೇಳಿಕೆ ಎಂದಿದ್ದಾರೆ. ವಾಸ್ತವದಲ್ಲಿ ಆ ಹೇಳಿಕೆಯು ಪ್ರವಾದಿ(ಸ) ಯವರ ಹದೀಸಿಗೆ ವಿರುದ್ಧವಾದ ಕಾರಣ ದುರ್ಬಲವಾದುದೇ ಆಗಿದೆ.

## 2. ಪ್ರವಾದಿ(ಸ) ರವರು ಹುಟ್ಟಿದ ದಿನಾಂಕ ಯಾವುದು?

ವಿದ್ವಾಂಸರು ಪ್ರವಾದಿ(ಸ) ರವರ ಜನ್ಮ ದಿನಾಂಕದ

ಕುರಿತು ಈ ಕೆಳಗಿನ ವಿಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ.

ಮೊದಲನೇ ಅಭಿಪ್ರಾಯ: ಅವರ ಜನನವು ರಬೀಉಲ್ ಅವ್ವಲ್ ತಿಂಗಳ ಎರಡನೇ ದಿನದಲ್ಲಾಗಿತ್ತು. ಇದು ಇಬ್ನು ಅಬ್ದುಲ್ ಬರ್ರ್ ರವರ ಹೇಳಿಕೆ. ಇದನ್ನು ಅಬೂ ಮಅ್'ಶರ್ ನಜೀಹ್ ಬಿನ್ ಅಬ್ದುಲ್ ರಹಮಾನ್ ಅಲ್-ಮದನಿಯವರಿಂದ ಅಲ್-ವಾಕಿದಿಯವರು ವರದಿ ಮಾಡಿರುವರು.

ಎರಡನೇ ಅಭಿಪ್ರಾಯ: ರಬೀಉಲ್-ಅವ್ವಲ್ ತಿಂಗಳ ಮೂರನೇ ದಿನದಲ್ಲಾಗಿತ್ತು. ಇದನ್ನು ಇಬ್ನು ಜಮಾಅಃ ಅಲ್-ಕತ್ತಾನಿ ದುರ್ಬಲವಾದ ರೀತಿಯಲ್ಲಿ ವರದಿ ಮಾಡಿರುವರು.

ಮೂರನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಎಂಟನೇ ದಿನವಾಗಿತ್ತು, ಇದನ್ನು ಅಲ್ ಹುಮೈದಿಯವ-

ರು ಇಬ್ನ್ ಹಝ್ಮ್ ರಿಂದ ವರದಿ ಮಾಡಿರುವರು ಮತ್ತು ಮುಹಮ್ಮದ್ ಬಿನ್ ಜುಬೈರ್ ಬಿನ್ ಮುತ್'ಇಮ್ ರವರಿಂದ ಅಝ್ಝುಹ್ರೀರವರು ಹಾಗೂ ಅಝ್ಝುಹ್ರೀರವ-ರಿಂದ ಮಾಲಿಕ್, ಉಕೈಲ್, ಯೂನಸ್ ಬಿನ್ ಯಝೀದ್ ಮತ್ತಿತರರು ವರದಿ ಮಾಡಿರುವರು. ಇಬ್ನು ಅಬ್ದುಲ್ ಬರ್ರ್ ರವರು ಚರಿತ್ರೆಗಾರರಿಂದ ವರದಿ ಮಾಡಿರುವರು. ಅವರೆಲ್ಲರೂ ಇದನ್ನು ಸಹೀಹ್ ಎಂದಿರುವರು. ಅಲ್ ಹಾಫಿಝುಲ್ ಕಬೀರ್ ಮುಹಮ್ಮದ್ ಇಬ್ನು ಮೂಸಾ ಅಲ್ ಖವಾರಿಝುಮೀರವರು ಇದನ್ನೇ ದೃಢೀಕರಿಸಿರು-ವರು. ಅಲ್ ಹಾಫಿಝ್ ಅಬುಲ್ ಖತ್ತಾಬ್ ಇಬ್ನು ದಹಿ-ಯ್ಯಾರವರು "التنوير في مولد البشر النذير" ಎನ್ನುವ ತನ್ನ ಗ್ರಂಥದಲ್ಲಿ ಇದನ್ನೇ ಅಂಗೀಕರಿಸಿರುವರು.

ನಾಲ್ಕನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಒಂಬತ್ತನೇ ದಿನವಾಗಿತ್ತು. ಇದನ್ನು ಮಹ್ಮೂದ್ ಪಾಷಾ ಅಲ್-ಫಲಕಿರವರು ಖಗೋಳಶಾಸ್ತ್ರದ ಅಧ್ಯಯನದ

ಮುಖಾಂತರ ದೃಢೀಕರಿಸಿರುವರು. ಇಬ್ನ್ ಉಸೈಮೀನ್ ರವರು ಕೂಡ ಇದರ ಕಡೆಗೇ ಒಲವು ತೋರಿರುವ-ರು ಮತ್ತು ಅರ್ರಹೀಖುಲ್ ಮಖ್ತೂಮ್ ರ ಲೇಖಕ ಅಲ್-ಮುಬಾರಕ್ ಪೂರಿಯವರು ಇದನ್ನೇ ಆಯ್ಕೆ ಮಾಡಿರುವರು.

ಐದನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಹತ್ತನೇ ದಿನವಾಗಿತ್ತು. ಇಬ್ನು ದಹಿಯ್ಯರವರು ಇದನ್ನು ತಮ್ಮ ಗತ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಅಬೂ ಜಾಫರ್ ಅಲ್-ಬಾಕಿರ್ ರವರಿಂದ ಇಬ್ನು ಅಸಾಕಿರ್ ರವರು ಇದನ್ನು ವರದಿ ಮಾಡಿರುವರು ಹಾಗೂ ಅಶ್ಶ್ಯ-ಅ್‌ಬಾರವರಿಂದ ಮುಜಾಹಿದ್ ರವರು ಇದನ್ನು ವರದಿ ಮಾಡಿರುವರು.

ಆರನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಹನ್ನೆ-ರಡನೇ ದಿನವಾಗಿತ್ತು. ಇಬ್ನ್ ಇಸ್ಹಾಕ್ ರವರು ಇದನ್ನೇ ನಿಗದಿಪಡಿಸಿದ್ದಾರೆ. ಇಬ್ನು ಅಬ್ಬಾಸ್ ಮತ್ತು ಜಾಬಿರ್

ರವರಿಂದ ಸಈದ್ ಬಿನ್ ಮೀನಾರವರು ಮತ್ತು ಸಈದ್ ಬಿನ್ ಮೀನಾರವರಿಂದ ಅಫ್ಫಾನ್ ರವರು ಮತ್ತು ಅಫ್ಫಾನ್ ರವರಿಂದ ಇಬ್ನು ಅಬೀ ಶೈಬಾರವರು ತನ್ನ ಮುಸನ್ನಫ್ ನಲ್ಲಿ ವರದಿ ಮಾಡಿರುವರು. ಇಬ್ನು ಅಬ್ಬಾಸ್ ಮತ್ತು ಜಾಬಿರ್ ರವರು ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು ಆನೆಯ ವರ್ಷದಲ್ಲಿ ರಬೀಉಲ್ ಅವ್ವಲ್ ತಿಂಗಳ ಹನ್ನೆರಡನೆಯ ತಾರೀಖು ಸೋಮವಾರದಂದು ಜನಿಸಿದರು. ಇದೇ ದಿನದಂದು ಅವರನ್ನು ಪ್ರವಾದಿಯಾಗಿ ಆಯ್ಕೆ ಮಾಡಲಾಯಿತು. ಇದೇ ದಿನ ಅವರು ಆಕಾಶ ಲೋಕಕ್ಕೆ ಮಿಅ್‌ರಾಜ್ ಹೋದರು. ಇದೇ ದಿನ ಅವರು ಹಿಜ್ರಾ ಹೋದರು ಮತ್ತು ಇದೇ ದಿನ ಅವರು ಮರಣ ಹೊಂದಿದರು. ಇದುವೇ ಜನ ಸಾಮಾನ್ಯರಲ್ಲಿ ಪ್ರಸಿದ್ಧವಾದ ಸಂಗತಿ.

ಏಳನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಇಪ್ಪತ್ತೊಂದನೇ ದಿನವಾಗಿತ್ತು. ಇದನ್ನು ಇಬ್ನು ದಹಿಯ್ಯರವ-

ರು ಮಂತ್ರಿ ಅಬೂ ರಾಫಿಅ್ ರವರ ಪತ್ರದಿಂದ, ಅಬೂ ರಾಫಿಅ್ ರವರು ತನ್ನ ತಂದೆ ಅಲ್ ಹಾಫಿಝ್ ಅಬೂ ಮುಹಮ್ಮದ್ ಇಬ್ನು ಹಝ್ಮ್ ರವರಿಂದ ವರದಿ ಮಾಡಿರುವರು. ಇಬ್ನು ಕಸೀರ್ ರವರು ಹೇಳುತ್ತಾರೆ: ಅಲ್ ಹುಮೈದಿರವರು ವರದಿ ಮಾಡಿರುವ ಇಬ್ನು ಹಝ್ಮ್ ರವರ ಮೊದಲ ಹೇಳಿಕೆ ಅಂದರೆ ರಬೀಉಲ್ ಅವ್ವಲ್ ತಿಂಗಳ ಎಂಟನೇ ದಿನ. ಇದುವೇ ಹೆಚ್ಚು ಸರಿಯಾದ ಮತ್ತು ಸಾಬೀತಾದ ಹೇಳಿಕೆ.

ಎಂಟನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗಳ ಹದಿನೇಳನೇ ದಿನವಾಗಿತ್ತೆಂದು ಹೇಳಲಾಗುತ್ತದೆ. ಇದನ್ನು ಇಬ್ನು ದಹಿಯ್ಯರವರು ಕೆಲವು ಶಿಯಾಗಳಿಂದ ವರದಿ ಮಾಡಿದ್ದಾರೆ.

## 3. ಪ್ರವಾದಿ (ಸ) ರವರ ಹುಟ್ಟಿದ ತಿಂಗಳು ಯಾವುದು?

ಪ್ರವಾದಿ(ಸ) ರವರ ಜನ್ಮ ತಿಂಗಳನ್ನು ನಿಶ್ಚಯಿಸುವಲ್ಲಿ ವಿದ್ವಾಂಸರು ಈ ಕೆಳಗಿನ ವಿಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ.

ಮೊದಲನೇ ಅಭಿಪ್ರಾಯ: ರಬೀಉಲ್ ಅವ್ವಲ್ ತಿಂಗ-ಳಾಗಿತ್ತು. ಇಬ್ನು ಕಸೀರ್ ಹೇಳುವಂತೆ ಇದುವೇ ಬಹು-ಸಂಖ್ಯಾತ ಪಂಡಿತರ ಅಭಿಪ್ರಾಯವಾಗಿದೆ. ಇದನ್ನು ಅಲ್ ಕತ್ತಾನಿ, ಅಝ್ಝುಹ್ರೀನಿ ಮತ್ತು ಇತರರು ಸಹೀಹ್ ಎಂದಿರುವರು.

ಎರಡನೇ ಅಭಿಪ್ರಾಯ: ರಬೀಉಲ್ ಆಖರ್ ತಿಂಗಳಾ-ಗಿತ್ತು. ಇದನ್ನು ಅಲ್ ಕತ್ತಾನಿಯವರು ವರದಿ ಮಾಡಿ-ರುವರು.

ಮೂರನೇ ಅಭಿಪ್ರಾಯ: ಸಫರ್ ತಿಂಗಳಾಗಿತ್ತು. ಇದನ್ನು

ಕೂಡ ಅಲ್ ಕತ್ತಾನಿಯವರು ವರದಿ ಮಾಡಿರುವರು.

ನಾಲ್ಕನೇ ಅಭಿಪ್ರಾಯ : ರಂಝಾನ್ ತಿಂಗಳಾಗಿತ್ತು. ಇಬ್ನು ಕಸೀರ್ ಇದರ ಕುರಿತು ಹೇಳುತ್ತಾರೆ: ಇದನ್ನು ಇಬ್ನು ಅಬ್ದುಲ್ ಬರ್ರ್ ರವರು ಝುಬೈರ್ ಬಿನ್ ಬಕ್ಕಾರ್ ರವರಿಂದ ವರದಿ ಮಾಡಿರುವರು. ಇದೊಂದು ಬಹಳ ದುರ್ಬಲವಾದ ವರದಿಯಾಗಿದೆ. ಪ್ರವಾದಿ(ಸ) ಯವರಿಗೆ ನಲ್ವತ್ತು ವರ್ಷ ಪ್ರಾಯವಾದಾಗ ರಂಝಾನ್ ತಿಂಗಳಲ್ಲಿ ವಹ್ಯ್ ಅವತೀರ್ಣಗೊಂಡಿರುವ ವಿಷಯದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಆದರೆ ಇದನ್ನೇ ಮಾನದಂಡವಾಗಿ ಮಾಡಿಕೊಂಡು ಪ್ರವಾದಿ(ಸ) ಯವರು ರಂಝಾನ್ ತಿಂಗಳಲ್ಲೇ ಜನಿಸಿರುವರು ಎನ್ನುವ ಮಾತಿಗೆ ಯಾವುದೇ ಹುರುಳಿಲ್ಲ. ಅಲ್ಲಾಹು ಚೆನ್ನಾಗಿ ಬಲ್ಲವನು.

ಐದನೇ ಅಭಿಪ್ರಾಯ: ಮುಹರ್ರಮ್ ತಿಂಗಳಾಗಿತ್ತು. ಇದನ್ನು ಮುಹ್ಯುದ್ದೀನ್ ಶೇಖ್ ಅಬ್ದುಲ್ ಖಾದರ್ ಜೀಲಾನಿ ರವರು ತನ್ನ ಗ್ರಂಥವಾದ ಅಲ್ ಗುನ್ಯಾಃ ದಲ್ಲಿ

ಆಶೂರಾದ ಶ್ರೇಷ್ಠತೆಯನ್ನು ವಿವರಿಸುತ್ತಾ ಉಲ್ಲೇಖಿಸಿ-ದ್ದಾರೆ.

## ಹೆಚ್ಚಿನ ಆದ್ಯತೆ:

ಮೇಲಿನ ಈ ಎಲ್ಲಾ ಹೇಳಿಕೆಗಳ ನಂತರ ತಿಳಿದು ಬರುವ ಸಂಗತಿಯೆಂದರೆ, ಪ್ರವಾದಿ(ಸ) ಯವರು ಜನಿಸಿದ ತಿಂಗಳು ರಬೀಉಲ್ ಅವ್ವಲ್ ಆಗಿತ್ತು ಮತ್ತು ಅವರ ಹುಟ್ಟಿದ ದಿನ ಅದೇ ತಿಂಗಳ ಒಂಬತ್ತನೇ ದಿನವಾಗಿತ್ತು. ಈ ಹೇಳಿಕೆಯು ಖಗೋಳಶಾಸ್ತ್ರದ ಅಧ್ಯಯನವನ್ನಾ-ಧರಿಸಿ ಹೇಳಲಾಗಿದೆ ಮತ್ತು ಈ ವಿಷಯದಲ್ಲಿ ಇದುವೇ ಅತ್ಯಂತ ಪ್ರಬಲವಾದ ಆಧಾರವೂ ಆಗಿದೆ. ಅಲ್ಲಾಹು ಚೆನ್ನಾಗಿ ಬಲ್ಲವನು.

## ಆಧಾರ ಪ್ರಮಾಣಗಳು:

١. السيرة النبوية لابن كثير (١ / ١٩٨ – ٢٠١)

٢. عمدة القاري شرح صحيح البخاري للعيني

(٦٩ / ٢٥)

٣. التمهيد لابن عبد البر (٣ / ٢٦)

٤. الفجر الساطع على الصحيح الجامع للزرهوني (٣ / ١١)

٥. شرح النووي على مسلم (١٥ / ١٠٠)

٦. تحفة الأحوذي للمباركفوري (١٠ / ٦٣)

٧. مرقاة المفاتيح شرح مشكاة المصابيح للملّا علي القاري (١٧ / ٨)

٨. مشكاة المصابيح مع شرحه مرعاة المفاتيح للتبريزي (٥ / ٣١٣)

٩. الاستيعاب في معرفة الأصحاب لابن عبدالبر (١ / ١٠ - ١١)

١٠. أنساب الأشراف للبلاذري (١ / ٣٩)

١١. أسد الغابة لابن الأثير (ص: ٨)

١٢. الرحيق المختوم للمباركفوري (ص: ٣٥)

١٣. الروض الأنف للسهيلي (١ / ٢٧٦)

١٤. المختصر الكبير في سيرة الرسول لابن جماعة الكتاني (ص: ٢٢)

١٥. الوفا بتعريف فضائل المصطفى لابن الجوزي (١ / ٤٩)

١٦. مجموع فتاوى ورسائل ابن عثيمين (٧ / ٢٨١)

١٧. الغنية لشيخ عبد القادر الجيلاني (الجزء الثاني، في فضائل يوم عاشوراء، صفحة ٨٨)



الحركة النصيحة الإسلامية

**ANNASEEHA ISLAMIC MOVEMENT**

SURATKAL, MANGALORE - 575 014
MOB: 9731593091 / 9945171612



**Jamiyathe Ahle Hadees Mangalore**